KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೨೨, ೨೦೧೦ (ವೈಶಾಖ ೨, ಶಕ ವರ್ಷ ೧೯೩೨) | ಸಂಚಿಕೆ ೧೬ |
|---|---|---|


## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಎಲ್‌ಎನ್‌ಡಿ [ಎನ್.ಎ] ಸಿಆರ್:83/2008-09, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2010**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶಿವಕೋಟೆ ಗ್ರಾಮದ ಸರ್ವೆ ನಂ:6ರಲ್ಲಿ 14-07 ಎಕರೆ / ಗುಂಟೆ ಜಮೀನನ್ನು The Center for Study of Science Technology & Policy [C.STEP] ರವರಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 279 ಎಲ್‌ಜಿಬಿ 2008, ದಿನಾಂಕ: 29.05.2009.
2. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 279 ಎಲ್‌ಜಿಬಿ 2008, ದಿನಾಂಕ:2.6.2009.
3. ಸರ್ಕಾರದ ಅದೇಶ ಸಂಖ್ಯೆ : ಆರ್‌ಡಿ 279 ಎಲ್‌ಜಿಬಿ 2008, ದಿನಾಂಕ:23.11.2009.
4. ತಹಸೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ, ಬೆಂಗಳೂರುರವರ ವರದಿ ಸಂಖ್ಯೆ : 557/2008-09, ದಿನಾಂಕ : 2.12.2008.
5. ಈ ಕಛೇರಿಯ ಇದೇ ಸಮ ಸಂಖ್ಯೆಯ ತಿಳುವಳಿಕೆ ಪತ್ರ ದಿನಾಂಕ: 13.1.2010.
6. ಡೈರೆಕ್ಟರ್ ಸಿ.ಎಸ್.ಟಿ.ಇ.ಪಿ. ಬೆಂಗಳೂರು ರವರ ಪತ್ರ ದಿನಾಂಕ: 1.2.2010.

ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ ಶಿವಕೋಟೆ ಗ್ರಾಮದ ಸರ್ವೆ ನಂ : 6ರಲ್ಲಿ 14-07 ಎಕರೆ / ಗುಂಟೆ ಜಮೀನನ್ನು The Center for Study of Science Technology & Policy ಸಂಸ್ಥೆಗೆ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇಕಡ 50%ರ ದರ ಹಾಗೂ ಇನ್ನಿತರೆ ಶುಲ್ಕಗಳನ್ನು ವಿಧಿಸಿ ಮಂಜೂರಿ ಮಾಡಲು ಸರ್ಕಾರ ಉಲ್ಲೇಖ [1]ರ ಪ್ರಕಾರ ಆದೇಶ ನೀಡಿರುತ್ತೆ. ಅದರಂತೆ, ಮಾರ್ಗಸೂಚಿ ಬೆಲೆ ಎಕರೆ 1ಕ್ಕೆ ರೂ. 15.00 ಲಕ್ಷದಂತೆ ಶೇಕಡ 50% ರಂತೆ ರೂ. 1,06,31,250/- ಗಳು ಪೋಡಿ ಶುಲ್ಕ ರೂ 55/- ಗಳ ಒಟ್ಟು ರೂ 1,06,31,305/- [ಒಂದು ಕೋಟಿ ಆರು ಲಕ್ಷದ ಮೂವತ್ತೊಂದು ಸಾವಿರದ ಮೂರು ನೂರ ಐದು ರೂ.ಗಳು ಮಾತ್ರ] ಗಳನ್ನು ಸರ್ಕಾರಕ್ಕೆ ಪಾವತಿಸಲು ಉಲ್ಲೇಖ [5]ರ ಪ್ರಕಾರ ನೋಟೀಸ್ ನೀಡಲಾಗಿದ್ದು ಅದರಂತೆ ಅರ್ಜಿದಾರ ಸಂಸ್ಥೆಯು ಚಲನ್ ಸಂಸ್ಥೆ : 63/360, ದಿನಾಂಕ: 29.1.2010 ರಲ್ಲಿ ರೂ. 71,31,250/- ಮತ್ತು ಚಲನ್ ಸಂಖ್ಯೆ : 63/201, ದಿನಾಂಕ : 13.10.2009ರಲ್ಲಿ ರೂ. 35.00 ಲಕ್ಷಗಳು ಹಾಗೂ ಚಲನ್

ಸಂಖ್ಯೆ : 63/361, ದಿನಾಂಕ : 29.1.2010ರಲ್ಲಿ ರೂ. 55–ಗಳು ಒಟ್ಟು ರೂ. 1,06,31,305/– [ಒಂದು ಕೋಟಿ ಆರು ಲಕ್ಷದ ಮೂವತ್ತೊಂದು ಸಾವಿರದ ಮೂರು ನೂರ ಐದು ರೂ.ಗಳು ಮಾತ್ರ] ಗಳನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಟ್ರಜರಿ ಬ್ರಾಂಚ್, ಎಲ್.ಸಿ. ರಸ್ತೆ, ಬೆಂಗಳೂರು ಇಲ್ಲಿ ಪಾವತಿಸಿ ಮೂಲ ಚಲನ್‌ಗಳನ್ನು ಉಲ್ಲೇಖ [6]ರ ಪತ್ರದ ಪ್ರಕಾರ ಹಾಜರುಪಡಿಸಿರುತ್ತಾರೆ.

ಆದ್ದರಿಂದ ಉಲ್ಲೇಖ [1] [2] ಮತ್ತು [3]ರ ಸರ್ಕಾರದ ಆದೇಶ ಪತ್ರ ಮತ್ತು ನಡವಳಿಗಳ ಪ್ರಕಾರ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಶಿವಕೋಟೆ ಗ್ರಾಮದ ಸರ್ವೆ ನಂ : 6ರಲ್ಲಿ 14–07 ಎಕರೆ / ಗುಂಟೆ ಜಮೀನನ್ನು ಸಂಸ್ಥೆ The Center for Study of Science Technology & Policy ಬೆಂಗಳೂರು ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20 [1]ಸಿ ಅನ್ವಯ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969 ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರಿ ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಸದರಿ ಮಂಜೂರಿ ಜಮೀನನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ. ಆದರೆ ಈ ಜಮೀನು ಬ್ಯಾಂಕ್ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗೆ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ.
4. ಸದರಿ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರಿ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
5. ಈ ಮಂಜೂರಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಅವುಗಳ ಅಂತಿಮ ಆದೇಶಗಳಿಗೆ ಒಳಪಡುತ್ತದೆ.
6. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಮೊದಲು ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಕಾನೂನು ರೀತ್ಯಾ ಪೂರ್ವಾನುಮೋದನೆ ಪಡೆದು ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದು.
7. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
8. ಮೇಲ್ಕಂಡ ಯಾವುದೇ ಷರತ್ತನ್ನು ಉಲ್ಲಂಘಿಸಿದಲ್ಲಿ ಮೇಲ್ಕಂಡ ಮಂಜೂರಾತಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 94

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ:ಎಲ್.ಆರ್.ಎಫ್:(ಎಸ್)(109)ಸಿಆರ್:18/09–10, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2010**

**ವಿಷಯ:** ಪ್ರೇಮ ವಿಜಯ ಚಾರಿಟಬಲ್ ಟ್ರಸ್ಟ್ (ರಿ) ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಗ್ರಾಮದ ಸರ್ವೆ ನಂ. 49/1 ರಲ್ಲಿ 1–25 ಎಕರೆ/ಗುಂಟೆ ಮತ್ತು 49/2 ರಲ್ಲಿ 0–15 ಗುಂಟೆ ಒಟ್ಟು 2–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ.47/ಶಾಸನ/ 2001: ಬೆಂಗಳೂರು ದಿನಾಂಕ: 23.04.2003.
2. ತಹಶೀಲ್ದಾರ್, ಆನೇಕಲ್ ತಾಲ್ಲೂಕು, ರವರ ಪತ್ರ ಸಂಖ್ಯೆ.ಎಲ್‌ಆರ್‌ಎಫ್. (109):ಸಿ.ಆರ್:15/09–10 ದಿ: 18.3.2010.
3. ಪ್ರೇಮ ವಿಜಯ ಚಾರಿಟಬಲ್ ಟ್ರಸ್ಟ್ (ರಿ), ಜಿಗಣಿ ಹೋಬಳಿ, ವಿಜೇತ ಕಾಂಪ್ಲೆಕ್ಸ್, ಬನ್ನೇರುಘಟ್ಟ ಪೊಲೀಸ್ ಠಾಣೆ ಎದುರು, ಬನ್ನೇರುಘಟ್ಟ ಗ್ರಾಮ ಮತ್ತು ಅಂಚೆ, ಬೆಂಗಳೂರು 560083 ರವರ ಮನವಿ ದಿನಾಂಕ: 2.3.2010.

ಪ್ರೇಮ ವಿಜಯ ಚಾರಿಟಬಲ್ ಟ್ರಸ್ಟ್ (ರಿ) ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಗ್ರಾಮದ ಸರ್ವೆ ನಂ. 49/1 ರಲ್ಲಿ 1–25 ಎಕರೆ/ಗುಂಟೆ ಮತ್ತು 49/2 ರಲ್ಲಿ 0–15 ಗುಂಟೆ ಒಟ್ಟು 2–00 ಎಕರೆ ಜಮೀನನ್ನು ಶೈಕ್ಷಣಿಕ

ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಆರ್.ಎಫ್(109):ಸಿಆರ್:15/09–10 ದಿನಾಂಕ: 18.3.2010 ರಲ್ಲಿ ಪ್ರಸ್ತಾವಿತ ಬನ್ನೇರುಘಟ್ಟ ಗ್ರಾಮದ ಸ.ನಂ. 49/1 ರಲ್ಲಿ 1–25 ಎಕರೆ/ಗುಂಟೆ 49/2 ರಲ್ಲಿ 0–15 ಗುಂಟೆ ಒಟ್ಟು 2–00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೊಂದಣಿ ಸಂಖ್ಯೆ: 110/09–10 ರಂತೆ ನೋಂದಣಿಯಾಗಿರುತ್ತದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (ii) ರ ಪ್ರಕಾರ ಶೈಕ್ಷಣಿಕ ಸಂಸ್ಥೆಗಳಿಗೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1)(ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಬನ್ನೇರುಘಟ್ಟ ಗ್ರಾಮದ ಸರ್ವೆ ನಂ. 49/1 ರಲ್ಲಿ 1–25 ಎಕರೆ/ಗುಂಟೆ ಮತ್ತು 49/2 ರಲ್ಲಿ 0–15 ಗುಂಟೆ ಒಟ್ಟು 2–00 ಎಕರೆ ಜಮೀನನ್ನು ಪ್ರೇಮ ವಿಜಯ ಚಾರಿಟಬಲ್ ಟ್ರಸ್ಟ್ (ರಿ) ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ:ವ್ಯಶಾಇ.47/ಶಾಸನ/2001: ಬೆಂಗಳೂರು, ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

8. ಪ್ರಸ್ತುತ ಸಂಸ್ಥೆ ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ ಅನುಮತಿ ನೀಡಿದೆ.

**ಹೆಚ್. ರಾಮಾಂಜನೇಯ**
ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 109

**ಅಪರ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಮೈಸೂರು ಜಿಲ್ಲೆ, ಮೈಸೂರು**

**ಸರ್ಕಾರದ ಪತ್ರ ಸಂಖ್ಯೆ ಕಂ.ಇ 80 ಎಲ್ ಜಿ ಎಂ 2009 ದಿ: 19.02.2010 ರಂತೆ ಈ ಪ್ರಾಥಮಿಕ ಅಧಿಸೂಚನೆಗೆ ಅನುಮೋದನೆ ನೀಡಿದ್ದು ಅಧಿಸೂಚನೆಯನ್ನು ಪ್ರಕಟಿಸಲು ಆದೇಶವಾಗಿದೆ.**

**ನಮೂನೆ 27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಗೋಮಾಳ ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ, ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಗೋಮಾಳ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಗೋಮಾಳ ಬಿ.ಖರಾಬು ಜಮೀನಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತಕ್ಕುದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಗೋಮಾಳ ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗೆ ಸದರೀ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು, ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯುಟಿ ಕಮೀಷನರನಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯುಟಿ ಕಮೀಷನರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಗೋಮಾಳ ಜಮೀನಿನ ಭಾಗ ಇತ್ಯಾದಿ ಇರುವ ಗ್ರಾಮಗಳು | ಮೈಸೂರು ತಾಲ್ಲೋಕು, ಜಯಪುರ ಹೋಬಳಿ, ಕೇರಗಳ್ಳಿ |
| ತಾಲ್ಲೂಕುಗಳು | ಮೈಸೂರು |
| ಜಿಲ್ಲೆ | ಮೈಸೂರು ಜಿಲ್ಲೆ |
| ಗೋಮಾಳ ಜಮೀನಿನ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಕೇರಗಳ್ಳಿ ಗ್ರಾಮದ ಸ.ನಂ. 60 ರಲ್ಲಿ 1.30 ಎಕರೆ |
| ಗೋಮಾಳ ಜಮೀನಿನ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 1.30 ಎಕರೆ |
| **ಮೇರೆ** | |
| ಪೂರ್ವಕ್ಕೆ: | ಸ.ನಂ.305ರ ಜಮೀನು |
| ಪಶ್ಚಿಮಕ್ಕೆ: | ಸ.ನಂ. 111, 112 ಹಾಗೂ 113 ರ ಜಮೀನಿದೆ |
| ಉತ್ತರಕ್ಕೆ: | ಸ.ನಂ. 109ರ ಜಮೀನಿದೆ |
| ದಕ್ಷಿಣಕ್ಕೆ: | 80 ಅಡಿ ರಸ್ತೆ ಬರುತ್ತದೆ |
| ಗೋಮಾಳ ಜಮೀನಿನ ಅಥವಾ ಅದರ ಭಾಗ | ಕೇರಗಳ್ಳಿ ಗ್ರಾಮದ ಸ.ನಂ. 60 ರಲ್ಲಿ 1.30 ಎಕರೆ |

ಅಪರ ಜಿಲ್ಲಾಧಿಕಾರಿ,
ಮೈಸೂರು ಜಿಲ್ಲೆ, ಮೈಸೂರು

ಪಿ.ಆರ್. 111

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್ಎನ್‌ಡಿ [ಎನ್.ಎ] ಸಿಆರ್ 215/2009–10, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2010**

**ವಿಷಯ:** ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ:18ರಲ್ಲಿ 2–00 ಎಕರೆ ಜಮೀನನ್ನು ಮುಸ್ಲಿಂ ಜನಾಂಗದ ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರು ರವರ ವರದಿ ಸಂಖ್ಯೆ : ಎಲ್ಎನ್‌ಡಿ [ಎನ್.ಎ.] ಸಿಆರ್ 1499/2009–10, ದಿನಾಂಕ; 24.2.2010.

ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ:18ರಲ್ಲಿ 2–00 ಎಕರೆ ಜಮೀನನ್ನು ಮುಸ್ಲಿಂ ಜನಾಂಗದ ಸ್ಮಶಾನಕ್ಕೆ ಮಂಜೂರು ಮಾಡುವ ಬಗ್ಗೆ ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಉಲ್ಲೇಖದ ಪ್ರಕಾರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರ ಪ್ರಕಾರ ಚಿಕ್ಕಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ : 18ರಲ್ಲಿ ಒಟ್ಟು 47/7 ಎಕರೆ / ಗುಂಟೆ ಜಮೀನಿದ್ದು ಇದು ಸರ್ಕಾರಿ ಗೋಮಾಳ ಜಮೀನಾಗಿರುತ್ತದೆ. ಇದರಲ್ಲಿ ಈ ಹಿಂದೆ 2–00 ಎಕರೆ ಜಮೀನನ್ನು ಮುಸ್ಲಿಂ ಜನಾಂಗದ ಸ್ಮಶಾನಕ್ಕೆ ಮಂಜೂರು ಮಾಡಲಾಗಿದ್ದು, ಎಂ.ಆರ್. 1/1998–99 ರಂತೆ ಖಾತೆ ದಾಖಲಾಗಿರುವುದಾಗಿ ಆದರೆ ಸದರಿ ಗ್ರಾಮದಲ್ಲಿ ಮುಸ್ಲಿಂ ಸುಮಾರು 7000ಕ್ಕೂ ಹೆಚ್ಚು ಮುಸ್ಲಿಂ ಜನಸಂಖ್ಯೆಯಿರುವುದಾಗಿ ಮತ್ತು ಹಾಲಿ ಇರುವ ಸ್ಮಶಾನವನ್ನು ಅಕ್ಕಪಕ್ಕದ ಲೇಔಟ್ ಎಂ.ಎಸ್. ಪಾಳ್ಯದಲ್ಲಿ ವಾಸವಾಗಿರುವ ಮುಸ್ಲಿಂ ಜನಾಂಗದವರು ಸಹ ಉಪಯೋಗಿಸುತ್ತಿರುವುದರಿಂದ ಸದರಿ ಸ್ಮಶಾನವು ಸಾಕಾಗುವುದಿಲ್ಲವಾಗಿ ಈ ಗ್ರಾಮಗಳಿಂದ ಒಟ್ಟು 25000 ಕ್ಕೂ ಹೆಚ್ಚು ಮುಸ್ಲಿಂ ಜನಸಂಖ್ಯೆ ಇರುವುದಾಗಿ ತಿಳಿಸಿ ಚಿಕ್ಕಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ : 18ರಲ್ಲಿ 2–00 ಎಕರೆ ಜಮೀನನ್ನು ಹೆಚ್ಚುವರಿಯಾಗಿ ಮುಸ್ಲಿಂ ಸ್ಮಶಾನದ ಉಪಯೋಗಕ್ಕೆ ಮಂಜೂರಿ ಮಾಡುವ ಬಗ್ಗೆ ವರದಿ ಮಾಡಿರುತ್ತಾರೆ.

ಉಲ್ಲೇಖದ ತಹಶೀಲ್ದಾರ್‌ರವರ ಪ್ರಸ್ತಾವನೆಯ ಪ್ರಕಾರ ಚಿಕ್ಕಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ : 18ರಲ್ಲಿ 2–00 ಎಕರೆ ಜಮೀನನ್ನು ಮುಸ್ಲಿಂ ಜನಾಂಗದ ಸ್ಮಶಾನದ ಉದ್ದೇಶಕ್ಕೆ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರಡಿಯಲ್ಲಿ ಈ ಕೆಳಕಂಡ ಷರತ್ತುಗಳೊಂದಿಗೆ ಕಾಯ್ದಿರಿಸಿ ಆದೇಶ ನೀಡಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು..
2. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
3. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು / ಮಾರ್ಪಡಿಸಲಾಗುವುದು.
4. ತಹಸೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸಿರುವ ಬಗ್ಗೆ ಕಂದಾಯ ದಾಖಲೆಗಳಲ್ಲಿ ನಮೂದಿಸತಕ್ಕದ್ದು ಮತ್ತು ಸದರಿ ಜಮೀನು ಒತ್ತುವರಿಯಾಗದಂತೆ ಸೂಕ್ತ ನಿಗಾವಹಿಸತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 114

## ತಹಸೀಲ್ದಾರ್ ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಉಪನಗರ, ಬೆಂಗಳೂರು

**ಸಂಖ್ಯೆ: ಎಲ್.ಎನ್.ಡಿ (ಎನ್ಎ) ಸಿಆರ್:1/2010–11**

### ಸಾರ್ವಜನಿಕ ಪ್ರಕಟಣೆ

**ನಮೂನೆ–27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಕಾಲುದಾರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ, ಕಾಲುದಾರಿ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಕಾಲುದಾರಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದು ಎಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸದರಿ ಜಮೀನಿನಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 (ತೊಂಬತ್ತು) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈ ಮಾಡಲಾದ ಮೊಬಲಗು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್‌ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈ ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್ ಪರಿಶೀಲಿಸುವುದು.

ಈ ಪ್ರಕಟಣೆಯನ್ನು (ಅಧಿಸೂಚನೆ) ಸರ್ಕಾರದಿಂದ ಪೂರ್ವಾನುಮತಿ ಪಡೆದು ಹೊರಡಿಸಲಾಗಿದೆ.

**ಅನುಸೂಚಿ**

| | | |
|---|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | : | ಯಲಹಂಕ |
| ತಾಲ್ಲೂಕು | : | ಬೆಂಗಳೂರು ಉತ್ತರ (ಅಪರ) |
| ಜಿಲ್ಲೆ | : | ಬೆಂಗಳೂರು ನಗರ |
| ಗುಂಡು ತೋಪು ಮೊದಲಾದುದರ ಭಾಗ | : | ಸರ್ಕಾರಿ ಕಾಲುದಾರಿ |
| ಅಥವಾ ಭಾಗದ ವರ್ಣನೆ | : | ಸ.ನಂ. 138 |
| ಕಾಲುದಾರಿ ಜಮೀನಿನ ವಿಸ್ತೀರ್ಣ | : | 0–01.08 ಗುಂಟೆ |
| ಮೇರೆ | : | ಪೂರ್ವಕ್ಕೆ: ಶಿವನಹಳ್ಳಿ ಗಡಿ<br>ಪಶ್ಚಿಮಕ್ಕೆ: ರಿ.ಸರ್ವೆ ನಂ.139ರ ಜಮೀನು<br>ಉತ್ತರಕ್ಕೆ: ಸ.ನಂ. 138ರ ಉಳಿಕೆ ಜಮೀನು<br>ದಕ್ಷಿಣಕ್ಕೆ: ಸ.ನಂ. 138ರ ಉಳಿಕೆ ಜಮೀನು |

ತಹಸೀಲ್ದಾರ್,

ಪಿ.ಆರ್. 115 ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ

## ಕಂದಾಯ ಸಚಿವಾಲಯ

**ಭೂ ಸ್ವಾಧೀನ ಕಾಯ್ದೆ ಕಲಂ 6(1)ರ ತಿದ್ದುಪಡಿ ಅಧಿಸೂಚನೆ**

**ಕ್ರಮಾಂಕ: ಕಂಇ 16 ಭೂಸ್ವಾಬೆ 2010, ದಿನಾಂಕ: 9ನೇ ಏಪ್ರಿಲ್ 2010**

ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚುಂಚನಕುಪ್ಪೆ ಗ್ರಾಮದ ಸರ್ವೆ ನಂ:16:33ರಲ್ಲಿ 3–00 ಎಕರೆ ಜಮೀನು ಭಾರತ ಬಾಹ್ಯಾಕಾಶ ಇಲಾಖೆ ಪರ ಭೂ ಸ್ವಾಧೀನ ಪಡಿಸಿಕೊಳ್ಳಲು ಕಾಯ್ದೆ ಕಲಂ 6(1)ರ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರ, ಗುರುವಾರ ಫೆಬ್ರವರಿ 11, 2010, ಭಾಗ–6 ರಲ್ಲಿ ಪ್ರಕಟವಾಗಿದ್ದು, ಇದರಲ್ಲಿ ಕ್ರಮಾಂಕ 16 ಭೂ ಸ್ವಾ ಬೆ 2001 ಎಂದು ಪ್ರಕಟವಾಗಿರುತ್ತದೆ.

| ಕಾಯ್ದೆ ಕಲಂ 6(1)ರ ಅಧಿಸೂಚನೆಯಲ್ಲಿ ಪ್ರಕಟವಾಗಿರುವುದು | ಕಾಯ್ದೆ ಕಲಂ 6(1)ರ ಅಧಿಸೂಚನೆಯಲ್ಲಿ ಪ್ರಕಟವಾಗ ಬೇಕಾಗಿರುವುದು |
|---|---|
| ಕ್ರಮ ಸಂಖ್ಯೆ: ಕ್ರಮಾಂಕ:ಕಂ.ಇ.16 ಭೂ ಸ್ವಾ ಬೆ 2001 | ಕ್ರಮಾಂಕ: ಕಂ.ಇ. 16 ಭೂ ಸ್ವಾ ಬೆ 2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 116 **ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯಿದೆ ಕಲಂ–17(4)ರ ಅನ್ವಯ ಕಲಂ–6(1)ನೇ ಪ್ರಕರಣದ ಮೇರೆಗೆ ಅಂತಿಮ ಘೋಷಣೆ**

**ಕ್ರಮಾಂಕ: ಕಂಇ. 22 :ಭೂಸ್ವಾಚ:2010, ದಿನಾಂಕ: 1ನೇ ಏಪ್ರಿಲ್ 2010**

ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ನೆರೆಪೀಡಿತ ಕುಟುಂಬಗಳನ್ನು ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸುವ ಸಲುವಾಗಿ ಅಗತ್ಯವಾಗಿದೆಯೆಂದು ದಾವಣಗೆರೆ ಜಿಲ್ಲೆ ಜಿಲ್ಲಾಧಿಕಾರಿಗಳವರ ಪತ್ರದ ಸಂ:ಎಲ್ಎಕ್ಯೂ.ಸಿಆರ್.88/09–10, ದಿ: 15.12.2009ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ ಹಾಗೂ ದಿನಾಂಕ: 31.12.2009 ರಂದು ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

ಸದರಿ ಅಧಿನಿಯಮದ 17 ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 9ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಸೂಚಿಸಿರುವ ನೋಟೀಸಿನ ಪ್ರಕರಣದಲ್ಲಿ ಸೂಚಿಸಿರುವ ನೋಟೀಸಿನ ಪ್ರಕಟಣೆಯ ದಿನಾಂಕದಿಂದ 15 ದಿವಸಗಳ ಮುಕ್ತಾಯದ ನಂತರ ಸದರಿ ಭೂಮಿಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದೆಂದು ನಿರ್ದೇಶಿಸಿರುತ್ತಾರೆ.

ಸದರಿ ಭೂ ಸ್ವಾಧೀನ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಅಗತ್ಯವಾಗಿ ಬೇಕಾಗಿರುವುದೆಂದು ಈ ಮೂಲಕ ಘೋಷಿಸಲಾಗಿದೆ. ಸದರಿ ಭೂ ಸ್ವಾಧೀನ ಅಧಿನಿಯಮದ ಪ್ರಕಾರ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಉಪವಿಭಾಗಾಧಿಕಾರಿ ಹಾಗೂ ಭೂ ಸ್ವಾಧೀನಾಧಿಕಾರಿ, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರನ್ನು ಸದರಿ ಜಮೀನುಗಳ ಸಂಬಂಧದಲ್ಲಿ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯವನ್ನು ನಿರ್ವಹಿಸುವಂತೆ ಈ ಮೂಲಕ ನೇಮಿಸಲಾಗಿದೆ. ಮತ್ತು ಈ ಜಮೀನಿನ ಅಧಿಕೃತ ಸ್ವಾಧೀನ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ಉಪವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ : ದಾವಣಗೆರೆ** **ತಾಲ್ಲೂಕು: ಹರಿಹರ** **ಹೋಬಳಿ: ಮಲೆಬೆನ್ನೂರು** **ಗ್ರಾಮ: ಗೋವಿನಹಾಳು**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಬೇಕಾಗುವ ಜಮೀನಿನ ಅಂದಾಜು | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 1 | ಗೋಣೆಪ್ಪ ಬಿನ್ ಬಸಪ್ಪ | ಗೋಣೆಪ್ಪ ಬಿನ್ ಬಸಪ್ಪ | 29 | ಖುಷ್ಕಿ | 29 | ರಸ್ತೆ | 23 | 29 | 2–20 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 112

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯಿದೆ ಕಲಂ–17(4)ರ ಅನ್ವಯ ಕಲಂ–6(1)ನೇ ಪ್ರಕರಣದ ಮೇರೆಗೆ ಅಂತಿಮ ಘೋಷಣೆ**

**ಕ್ರಮಾಂಕ: ಕಂಇ.23:ಭೂಸ್ವಾಚ:2010, ದಿನಾಂಕ: 1ನೇ ಏಪ್ರಿಲ್ 2010**

ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ನೆರೆಪೀಡಿತ ಕುಟುಂಬಗಳನ್ನು ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸುವ ಸಲುವಾಗಿ ಅಗತ್ಯವಾಗಿದೆಯೆಂದು ದಾವಣಗೆರೆ ಜಿಲ್ಲೆ ಜಿಲ್ಲಾಧಿಕಾರಿಗಳವರ ಪತ್ರದ ಸಂ:ಎಲ್ಎಕ್ಯೂಸಿಆರ್.99/09–10, ದಿ: 14.1.2010 ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ ಹಾಗೂ ದಿನಾಂಕ: 31.12.2009 ರಂದು ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

ಸದರಿ ಅಧಿನಿಯಮದ 17 ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 9ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಸೂಚಿಸಿರುವ ನೋಟೀಸಿನ ಪ್ರಕರಣದಲ್ಲಿ ಸೂಚಿಸಿರುವ ನೋಟೀಸಿನ ಪ್ರಕಟಣೆಯ ದಿನಾಂಕದಿಂದ 15 ದಿವಸಗಳ ಮುಕ್ತಾಯದ ನಂತರ ಸದರಿ ಭೂಮಿಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದೆಂದು ನಿರ್ದೇಶಿಸಿರುತ್ತಾರೆ.

ಸದರಿ ಭೂ ಸ್ವಾಧೀನ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಅಗತ್ಯವಾಗಿ ಬೇಕಾಗಿರುವುದೆಂದು ಈ ಮೂಲಕ ಘೋಷಿಸಲಾಗಿದೆ. ಸದರಿ ಭೂ ಸ್ವಾಧೀನ ಅಧಿನಿಯಮದ ಪ್ರಕಾರ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಉಪವಿಭಾಗಾಧಿಕಾರಿ ಹಾಗೂ ಭೂ ಸ್ವಾಧೀನಾಧಿಕಾರಿ, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರನ್ನು ಸದರಿ ಜಮೀನುಗಳ ಸಂಬಂಧದಲ್ಲಿ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯವನ್ನು ನಿರ್ವಹಿಸುವಂತೆ ಈ ಮೂಲಕ ನೇಮಿಸಲಾಗಿದೆ. ಮತ್ತು ಈ ಜಮೀನಿನ ಅಧಿಕೃತ ಸ್ವಾಧೀನ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ಉಪವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ : ದಾವಣಗೆರೆ** **ತಾಲ್ಲೂಕು: ಹರಿಹರ** **ಹೋಬಳಿ: ಕಸಬಾ** **ಗ್ರಾಮ: ದೀಟೂರು**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಬೇಕಾಗುವ ಜಮೀನಿನ ಅಂದಾಜು | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 1 | ಮಹದೇವಪ್ಪ ಬಿನ್ ಈರಪ್ಪ ಮತ್ತು ಸಿದ್ದಪ್ಪ ಬಿನ್ ಈರಪ್ಪ | ಮಹದೇವಪ್ಪ ಬಿನ್ ಈರಪ್ಪ ಮತ್ತು ಸಿದ್ದಪ್ಪ ಬಿನ್ ಈರಪ್ಪ | 1 | ಖುಷ್ಕಿ | 16/1 | ರಸ್ತೆ | 5 | ರಸ್ತೆ | 4–30<br>0–018 ಖ | 3–71 |
| 2 | ಡಿ.ವಿ.ಚಂದ್ರಶೇಖರಪ್ಪ ಬಿನ್ ವೀರಪ್ಪ | ಡಿ.ವಿ.ಚಂದ್ರಶೇಖರಪ್ಪ ಬಿನ್ ವೀರಪ್ಪ | 16/1 | ಖುಷ್ಕಿ | 16/2 | 1 | 5 | 16/1ರ ಉಳಿಕೆ | 1–10 | 0–76 |
| 3 | ಪಿ.ಕಲ್ಲಪ್ಪ ಬಿನ್ ಮುದುಕಪ್ಪ | ಪಿ.ಕಲ್ಲಪ್ಪ ಬಿನ್ ಮುದುಕಪ್ಪ | 16/2 | ಖುಷ್ಕಿ | 17 | 16/1 | 5 | ರಸ್ತೆ | 1–31 | 1–10 |
| | | | | | | | | **ಒಟ್ಟು** | **7–31<br>0–18 ಖ** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

ಪಿ.ಆರ್. 113